# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | 979(1198) |
| ಸದಸ್ಯರ ಹೆಸರು | ಡಾ॥ ವೈ.ಎ ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 16.03.2020 |
| ಉತ್ತರಿಸುವ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಸರ್ಕಾರಿ ಶಾಲೆಗಳಲ್ಲಿನ ಸಹ ಶಿಕ್ಷಕರಿಗೆ ಮುಖ್ಯೋಪಧ್ಯಾಯರಾಗಿ ಬಡ್ತಿ ನೀಡಲು ವಿಳಂಬಧೋರಣೆ ಅನುಸರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಿ.ಕೆ. ಪವಿತ್ರ ಪ್ರಕರಣ ಹಾಗೂ ಜೇಷ್ಠತಾ ಪಟ್ಟಿಗಳಲ್ಲಿನ ಗೊಂದಲದಿಂದಾಗಿ ವಿಳಂಬವಾಗಿರುವುದು ಸರ್ಕಾರದ ಗಮನದಲ್ಲಿದೆ |
| ಆ. | ಬಂದಿದ್ದಲ್ಲಿ ಯಾವ ಕಾಲಮಿತಿಯೊಳಗೆ ಅರ್ಹ ಸಹ ಶಿಕ್ಷಕರನ್ನು ಮುಖ್ಯೋಪಾಧ್ಯಾಯರಾಗಿ ಬಡ್ತಿ ನೀಡಲಾಗುವುದು? | 1. 2019-20ನೇ ಸಾಲಿನಲ್ಲಿ ಕಲಬುರ್ಗಿ ವಿಭಾಗದ ವ್ಯಾಪ್ತಿಯಲ್ಲಿ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರಿಗೆ ದಿನಾಂಕ:01/01/2020ರಲ್ಲಿದಂತೆ ಬಡ್ತಿಗಾಗಿ ನಿಗಧಿಪಡಿಸಿದ, ಒಟ್ಟು: 455 ಗ್ರೂಪ್-"ಬಿ" ವೃಂದದ ಸರ್ಕಾರಿ ಪ್ರೌಢಶಾಲಾ ಮುಖ್ಯ ಶಿಕ್ಷಕರ ಹುದ್ದೆಗಳಿಗೆ ದಿನಾಂಕ:03/01/2020ರಂದು ಬಡ್ತಿ ನೀಡಲಾಗಿದೆ. ಬಡ್ತಿ ಹೊಂದಿದ ಮುಖ್ಯ ಶಿಕ್ಷಕರಿಗೆ ದಿನಾಂಕ:06/03/2020ರಂದು ಸ್ಥಳ ನಿಯುಕ್ತಿಗೊಳಿಸಲು ಕೌನ್ಸಿಲಿಂಗ್ ನಡೆಸಲಾಗಿದೆ.<br><br>2. 2019-20ನೇ ಸಾಲಿನಲ್ಲಿ ಧಾರವಾಡ ವಿಭಾಗ ವ್ಯಾಪ್ತಿಯಲ್ಲಿನ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರಿಗೆ ಗ್ರೂಪ್-"ಬಿ" ವೃಂದದ ಸರ್ಕಾರಿ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಒಟ್ಟು: 229 ಹುದ್ದೆಗಳಿಗೆ, ದಿನಾಂಕ:09/09/2019ರಂದು ಕೌನ್ಸಿಲಿಂಗ್ ಮೂಲಕ ಬಡ್ತಿ ನೀಡಲಾಗಿದೆ.<br><br>3. ಬೆಂಗಳೂರು, ಮೈಸೂರು ವಿಭಾಗಗಳಲ್ಲಿ ಹಾಲಿ ಚಾಲ್ತಿಯಲ್ಲಿದ್ದ ಪ್ರೌಢ ಶಾಲಾ ಸಹ ಶಿಕ್ಷಕರ ಜೇಷ್ಠತಾ ಪಟ್ಟಿಯಲ್ಲಿ ಲೋಪದೋಷಗಳು ಕಂಡು ಬಂದಿವೆ. ಈ ಹಿನ್ನೆಲೆಯಲ್ಲಿ ಸರ್ಕಾರದ ಪತ್ರ ಸಂಖ್ಯೆ: ಇಡಿ 152 ಎಲ್‌ಬಿಪಿ 2014, ದಿನಾಂಕ:20/05/2014ರಲ್ಲಿ ನೀಡಿರುವ ನಿರ್ದೇಶನಗಳಂತೆ, ಪ್ರೌಢಶಾಲಾ ಸಹ ಶಿಕ್ಷಕರ ಜ್ಯೇಷ್ಠತಾ ಪಟ್ಟಿಯನ್ನು ಹಾಗೂ ರೋಸ್ಟರ್ ಮೆರಿಟ್ ಆಧಾರದ ಮೇಲೆ, ಬೆಂಗಳೂರು ಮತ್ತು ಮೈಸೂರು ವಿಭಾಗವಾರು ಪ್ರತ್ಯೇಕವಾಗಿ ಅಂತಿಮಗೊಳಿಸಬೇಕಾಯಿತು. ಈ ಕಾರಣದಿಂದ ಮುಂಬಡ್ತಿ ಪ್ರಕ್ರಿಯೆ ವಿಳಂಬವಾಗಿರುತ್ತದೆ.<br><br>ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಬೆಂಗಳೂರು ಮತ್ತು ಮೈಸೂರು ವಿಭಾಗವಾರು ಪ್ರತ್ಯೇಕವಾಗಿ ದಿನಾಂಕ:06/02/2020ರಂದು |

| | | | |
|---|---|---|---|
| | | | ಪ್ರಕಟಿಸಲಾಗಿದೆ. ಅಂತಿಮ ಜ್ಯೇಷ್ಠತಾ ಪಟ್ಟಿಯ ಅನುಸಾರ ಪ್ರೌಢಶಾಲಾ ಸಹ ಶಿಕ್ಷಕರ ವೃಂದದಿಂದ, ಮುಖ್ಯ ಶಿಕ್ಷಕರ ವೃಂದಕ್ಕೆ, ಅರ್ಹರಾಗುವ ಶಿಕ್ಷಕರುಗಳ ತಾತ್ಕಲಿಕ ಅರ್ಹತಾ ಪಟ್ಟಿಯನ್ನು ದಿನಾಂಕ:07/02/2020ರಂದು ಪ್ರಕಟಿಸಿದೆ. ಬಡ್ತಿ ನೀಡುವ ಸಂಬಂಧ ಕಾರ್ಯ ನಿರ್ವಹಣಾ ವರದಿ ಹಾಗೂ ಪೂರಕ ದಾಖಲೆಗಳನ್ನು ಪಡೆಯಲಾಗಿದ್ದು, ಪ್ರೌಢಶಾಲಾ ಸಹ ಶಿಕ್ಷಕರ ವೃಂದದಿಂದ ಮುಖ್ಯ ಶಿಕ್ಷಕರ ವೃಂದಕ್ಕೆ ಬಡ್ತಿ ನೀಡುವ ಪ್ರಕ್ರಿಯೆ ಚಾಲನೆಯಲ್ಲಿದೆ.<br><br>ಬೆಂಗಳೂರು ವಿಭಾಗದ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ:06/02/2020ರಂದು ಪ್ರಕಟಿಸಲಾಗಿರುತ್ತದೆ. ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರ ವೃಂದದಿಂದ ಸರ್ಕಾರಿ ಪ್ರೌಢಶಾಲಾ ಮುಖ್ಯ ಶಿಕ್ಷಕರ ವೃಂದದ 312 ಖಾಲಿ ಇರುವ ಹುದ್ದೆಗಳಿಗೆ ಬಡ್ತಿ ನೀಡುವ ಸಂಬಂಧ ದಿನಾಂಕ:10/03/2020ರಂದು ಇಲಾಖಾ ಮುಂಬಡ್ತಿ ಸಮಿತಿ ಸಭೆಯ ಅನುಮೋದನೆ ಪಡೆಯಲಾಗಿದೆ. ಸದರಿ ಸಮಿತಿಯ ನಿರ್ಣಯದಂತೆ, ಶೀಘ್ರವಾಗಿ ಮುಖ್ಯ ಶಿಕ್ಷಕರ ಖಾಲಿ ಹುದ್ದೆಗಳಿಗೆ ಕೌನ್ಸಿಲಿಂಗ್ ಮೂಲಕ ಸ್ಥಳ ನಿಯುಕ್ತಿಗೊಳಿಸಿ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ<br><br>4. ಮೈಸೂರು ವಿಭಾಗದ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದ್ದು, ಅಂತಿಮವಾಗಿ ಆಕ್ಷೇಪಣೆಗಳು ಸ್ವೀಕೃತವಾಗಿರುವುದರಿಂದ, ಆಕ್ಷೇಪಣೆಗಳನ್ನು ಸರಿಪಡಿಸಿ, ಜ್ಯೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿ, ಸರ್ಕಾರಿ ಪ್ರೌಢಶಾಲಾ ಮುಖ್ಯ ಶಿಕ್ಷಕರ ವೃಂದದ 410 ಖಾಲಿಯಿರುವ ಹುದ್ದೆಗಳಿಗೆ ಬಡ್ತಿ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |

ಸಂಖ್ಯೆ: ಇಡಿ 36 ಎಸ್‌ಓಹೆಚ್ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು